ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಗುರುವಾರ, ದಿನಾಂಕ : 10 ನೇ ಡಿಸೆಂಬರ್, 2020

ಕಸ ವಿಲೇವಾರಿ ಬಗ್ಗೆ

ಶ್ರೀ ಎನ್. ಅಪ್ಪಾಜಿಗೌಡ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) –

274 (463) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕಸವನ್ನು ವಿಲೇವಾರಿ ಮಾಡಲು ಯಾವಾಗ ಗುತ್ತಿಗೆಯನ್ನು ನೀಡಲಾಗಿದೆ; ಗುತ್ತಿಗೆಯ ಅವಧಿ ಮುಗಿದಿದೆಯೇ; ಅದೇ ಗುತ್ತಿಗೆದಾರರನ್ನು ಮುಂದುವರೆಸಲು ನಿಯಮಗಳಲ್ಲಿ ಅವಕಾಶವಿದೆಯೇ; ಇಲ್ಲವಾದಲ್ಲಿ, ನಿಯಮ ಉಲ್ಲಂಘಿಸಿರುವ ಅಧಿಕಾರಿಗಳ ವಿರುದ್ಧ ಯಾವ ಕ್ರಮ ಕೈಗೊಳ್ಳಲಾಗಿದೆ;

(ಆ) ದಿನಾಂಕ : 01.01.2018 ರಿಂದ 30.11.2020 ರವರೆಗೆ ಕಸ ಸಂಗ್ರಹಣಾ ಕೇಂದ್ರಕ್ಕೆ ಪ್ರತಿ ದಿನ ಯಾವ ವಾಹನದಲ್ಲಿ ಎಷ್ಟು ಟನ್ ಕಸ ಬಂದಿರುತ್ತದೆ ತೂಕವನ್ನು ಪರಿಶೀಲಿಸಲಾಗಿದೆಯೇ ; ದಿನಾಂಕ, ಪ್ರತಿ ವಾಹನದ ತೂಕದ ರಶೀದಿ ವಿವರ, ವಾಹನದ ಮಾದರಿ, ವಾಹನಗಳ ಸಂಖ್ಯೆ, ತೂಕ ಪರಿಶೀಲಿಸಿದ ಸಿಬ್ಬಂದಿಯ ಹೆಸರು, ದಿನಾಂಕವಾರು ಸಂಪೂರ್ಣ ವಿವರ ನೀಡುವುದು;

(ಇ) ಕಸ ಸಂಗ್ರಹಣಾ ಕೇಂದ್ರದಲ್ಲಿರುವ ವೇ-ಬ್ರಿಡ್ಜ್‌ನ ನಿರ್ವಹಣೆಯನ್ನು ಪಾಲಿಕೆ ನಿರ್ವಹಿಸುವುದೇ ಅಥವಾ ಗುತ್ತಿಗೆದಾರರು ನಿರ್ವಹಿಸುತ್ತಾರೆಯೇ; ಇದು ಪ್ರತಿ ವರ್ಷ ತೂಕ ಮತ್ತು ಅಳತೆ ಇಲಾಖೆಯ ತಪಾಸಣೆಗೆ ಒಳಪಟ್ಟಿದೆಯೇ; (ವಿವರಗಳನ್ನು ಒದಗಿಸುವುದು)

(ಈ) ಕಸ ಸಂಗ್ರಹಣೆ ಹಾಗೂ ವಿಲೇವಾರಿ ಸರಿಯಾದ ರೀತಿಯಲ್ಲಿ ನಡೆಯದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಕೈಗೊಂಡಿರುವ ಕ್ರಮಗಳಾವುವು?